# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಫೆಬ್ರವರಿ ೨೩, ೨೦೧೨ (ಫಾಲ್ಗುಣ ೪, ಶಕ ವರ್ಷ ೧೯೩೩) | ಸಂಚಿಕೆ ೮ |
| --- | --- | --- |

## ಭಾಗ – ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**FORM-IV**

**(See Rule 12)**

**NOTICE**

It is hereby notified that the undersigned has changed his/her name from **KHATIJA BABALAL MULLANI** to **KAVITA NARAYAN. KHANAGAVI.**

PD-14 KHATIJA BABALAL MULLANI

**FORM-1**

**(See rule 9)**

**Department of Education**

**Office of the B.E.O. GOKAK**

**NOTIFICATION**

Shri **VENKATESH MAHALINGAPPA DOMBAR** Working as Teacher in the K.B.S. MAMADAPUR. TAL : GOKAK. Education Department of Office of Block Education Office, GOKAK is permitted to change his name to **VENKATESH. MAHALINGAPPA. KOUJALAGI.**

ಕ್ಷೇತ್ರ ಶಿಕ್ಷಣಾಧಿಕಾರಿಗಳು,
ಗೋಕಾಕ್

PD-15

**ನಮೂನೆ–1**

**(ನಿಯಮ–9)**

**ಶಿಕ್ಷಣ ಇಲಾಖೆ**

**ಅಧಿಸೂಚನೆ**

ಶ್ರೀ ಬಸವಯ್ಯ ಶಂಕರಯ್ಯ ಲದ್ದೀಮಠ ರವರು ಸಹ ಶಿಕ್ಷಕರಾಗಿ ಶ್ರೀ ಗುರುಗೋರಕ್ಷನಾಥ ಪ್ರೌಢ ಶಾಲೆ ಗೋಕುಲ, ಹುಬ್ಬಳ್ಳಿ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು ಬಸವಯ್ಯ ಶಂಕರಯ್ಯ ಹಿರೇಮಠ ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

**ಉಪ ನಿರ್ದೇಶಕರು (ಆಡಳಿತ)**
ಸಾರ್ವಜನಿಕ ಶಿಕ್ಷಣ ಇಲಾಖೆ,
ಧಾರವಾಡ

ಪಿ.ಡಿ.16

## FORM-1

**(See rule 9)**

**Department of Karnataka Legislative Assembly**

**Office of the Karnataka Legislative Assembly, Vidhana Soudha, Bangalore**

**NOTIFICATION**

Smt. **K. PRIYADARSHINI,** Working as Junior Console Operator, in the Karnataka Legislative Assembly Secretariat is permitted to change her name to as **SMT. AYESHA KHAN.**

**K. NOOR MOHAMED,**
Deputy Secretary,
Karnataka Legislative Assembly Secretariat.

PD-17

## ನಮೂನೆ–1

**(ನಿಯಮ–9)**

**ಶಿಕ್ಷಣ ಇಲಾಖೆ**

**ಕಾರ್ಯಾಲಯ, ಬಿ.ಇ.ಓ. ಮುದ್ದೇಬಿಹಾಳ**

**ಅಧಿಸೂಚನೆ**

ಶ್ರೀ ಬಸವರಾಜ ಭಗವಂತಪ್ಪ ಮೊಪಗಾರ ರವರು ಸಹ ಶಿಕ್ಷಕರಾಗಿ ಎಚ್.ಪಿ.ಎಸ್. ದೇವರಹುಲಗಬಾಳ, ತಾ॥ ಮುದ್ದೇಬಿಹಾಳ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು ಬಸವರಾಜ ಭಗವಂತಪ್ಪ ದೊರನಳ್ಳಿ ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

**ಕ್ಷೇತ್ರ ಶಿಕ್ಷಣಾಧಿಕಾರಿಗಳು,**
ಮುದ್ದೇಬಿಹಾಳ,
ವಿಜಾಪೂರ.

ಪಿ.ಡಿ.18

## FORM-IV

**(See rule 12)**

**NOTICE**

It is hereby notified that the undersigned has changed his name from Sri **BASAPPA RAMAPPA HOLER** to **BASAVARAJ RAMAPPA CHANDRAGIRI.**

PD-19

**BASAPPA RAMAPPA HOLER**

## FORM-1

**Department of Education**

**BLOCK EDUCATION OFFICE, HAVERI**

**NOTIFICATION**

Sri **ZAHIDA HASHAMSAB MEDUR** Working as Assistant Teacher in the Education Department of Office of Block Education Office, Haveri is permitted to change his name to **ZAHIDA SHAFIULLA HONNALLI.**

Signature and Designation of the
Appointing Authority

PD-20

## FORM-IV

**(See rule 12)**

**NOTICE**

It is hereby notified that the undersigned has changed his name from Sri **SADASHIV THALEPPA HUCH HOLEPPAGOL,** to **SADASHIV THALEPPA HOLEPPAGOL.**

PD-21

**SADASHIV THALEPPA HUCH HOLEPPAGOL.**

## FORM-IV

**(See rule 12)**

**NOTICE**

It is hereby notified that the undersigned has changed his name from Sri **DASAIAH** to **DIVAKARA.**

PD-22

**DASAIAH**

## KARNATAKA STATE BOARD OF WAKFS

**DARUL AWKAF, No.6, Cunningham Road, Bangalore**

**KTW/REG/64/HVR/2001-02, Dated 24-10-2001**

**CERTIFICATE OF REGISTRATION**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl. No. of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| | Anjuman-e-Islam<br>Paravath Siddgiri village, Hirekerur Taluk, Haveri District. | **PROPERTY**<br>G.P. No. 95 & 96 Masjid building & Arabic Madrasa & Open Space<br>**MEASUREMENT:**<br>East-West : 40' feet<br>North-South : 60' feet<br>**BOUNDARIES :**<br>East : Panchayath Road<br>West: Panchayath Road<br>North: Panchayath Road<br>South: Panchayath Road | Anjuman-E-Islam Parvath Siddgiri village, Hirekerur Taluk Haveri District managed by its Chairman. |

**Chief Executive Officer,**

PD-16

Karnataka State Board of Wakfs

## KARNATAKA STATE BOARD OF WAKFS

**DARUL AWKAF, No.6, Cunningham Road, Bangalore**

**No. KTW/REG/18/BLY/03-04, Dated 16-4-2004**

**CERTIFICATE OF REGISTRATION**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl. No. of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| 530 | Malang Shah Wali<br>Dargah and iddgah (Sunni) Yerbanahalli Village, Tornagal Sandur Taluk, Bellary District. | Sy. No. 97 of Yarbanahalli village (Grama) Tornagal Hobli, Sandur Taluk<br>**MEASUREMENT:**<br>5A – 38 G | Malang Shah Wali Dargah Committee Yerbanahalli Village, represented by its President. |

| | | | |
|---|---|---|---|
| | | **BOUNDARIES :**<br>East : Halla (Naala)<br>West: Halla and Private lands<br>North: Halla and Private lands<br>South: Land of Gadalingappa | |

**Chief Executive Officer,**
Karnataka State Board of Wakfs

PD-17

## IN THE COURT OF THE IV ADDITIONAL CITY CIVIL AND SESSION JUDGE (CCH-21) (MAYOHALL) AT BANGALORE

**P & S.C. No. 25002 of 2012**

**PETITIONERS :**

1. Sri C.P. Rangachar, S/o Late C. Padmanabhan, aged about 68 years.
2. Smt. Vidya Rangachar, W/o Sri C.P. Rangachar, Aged about 65 years.
   Both are r/at No. B-4, Epsilon Villas, Yemlur Home Owners Association, Yemlur Village Road, Yemlur Post, Bangalore-560037.

**-Versus -**

**RESPONDENT : NIL**

### PUBLIC NOTICE

Notice is hereby given that a petition has been made to this Court Under Sec. 372 of the Indian Succession Act, for grant of Succession Certificate to the estate of the deceased Rajiv Char who died on 21-03-2011 at Bangalore.

Bet it known that No Caveat has been entered and the said petition is posted for hearing on 28-02-2012 at 11'O clock. Any persons claiming to have any interest may come and participate in the proceedings before grant of Succession Certificate.

**SCHEDULE**

Fixed Deposits made in HDFC Bank, No. 77-IT Park, G-01, Discoverer Building, I.T. Park, Whitefield, Bangalore-560066, Branch as detailed hereunder.

| Sl. No. | Deposit Account No. | Date of Deposit | Deposit Amount Rs. | Maturity amount Rs. | Date of Maturity |
|---|---|---|---|---|---|
| 1 | 00094470158062 | 02-04-2010 | 58,222.07 | 62,265-64 | 17-04-2011 |
| 2 | 00764470018090 | 12-01-2011 | 1,44,902.23 | 1,56,880.08 | 13-01-2012 |
| 3 | 00774470166401 | 10-04-2011 | 1,15,637.21 | 1,26,272.46 | 26-04-2012 |
| 4 | 00774470197251 | 29-09-2011 | 1,13,687.31 | 1,25,085.52 | 15-10-2012 |
| 5 | 00774470013815 | 11-07-2010 | 8,52,586.67 | 9,09,532.22 | 12-07-2011 |

Given under my hand and seal of this Court on this 7th day of February 2012.

By Order of the Court,
Asst. Registrar,
City Civil Court Mayo Hall Unit, Bangalore

PD-18

## IN THE ADDITIONAL CITY CIVIL AND SESSION JUDGE BANGALORE (CCH-21)

**P & S.C. No. 25030 /2011**

**BETWEEN :**

H.R. Vasanthamma
W/o late P.A. Narasimhan

Aged about 60 years

Residing at No. 1470,

Anantaranga Krupa,

24th Main, 5th Cross, 1st phase,

2nd stage, BTM layout,

Bangalore-560076.

**PETITIONER :**

AND

**RESPONDENT :**

**NIL**

## PUBLIC NOTICE

Whereas notice is hereby given that a petition has been made to this court under section 372 of the Indian Succession Act, prays for grant of probate certificate in favour of the petitioner in respect of WILL, date 20-1-2011 executed by P.A. Narasimhan in favour of the petitioner and issue succession Certificate in respect of Item No. 2 the investment made in the shares, who died on 21-3-2011 at No. 1470, Anantaranga Krupa, 24th Main, 5th Cross, 1st phase, 2nd stage, BTM layout, Bangalore-560076.

Be it to know that No Caveat has been entered and the said petition is posted for hearing on 28-02-2012 at 11-00, any person/s claiming to have any interest may come and participate in the proceedings before Probate Certificate.

## SCHEDULE

### ITEM NO. 1

All that piece and parcel of the property bearing plot No. 1470, Anantaranga Krupa, 24th Main, 5th Cross, 1st phase, 2nd stage, BTM layout, Bangalore-560076 consisting of a house in ground floor.

**Bounded on the :**

North by : Site No. 1471

South by : Site No. 1470/A

East by : Site No. 1467

West by : Road

**Measuring :**

North to South : 12.19 meters and

East to West : 8.83.

By Order of the Court

Asst. Registrar,
City Civil Court Mayo Hall Unit
Bangalore

### ITEM NO. 2

Investments made in the shares of following companies

1. Oswal Chemicals and Fertilizers limited – 500 Nos.
2. Reliance Industries – 38 Nos.
3. Satyam Computers services limited – 100 Nos.
4. Swaika Vanaspat – 100 Nos
5. Tata Consultench Services – 28 Nos.
6. Unitech Limited – 20 Nos.

Given under hand and seal of the court this 2nd day of February 2012.

By Order of the Court

Asst. Registrar,
City Civil Court Mayo Hall Unit, Bangalore

**PD-19**

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ, ಧಾರವಾಡ,

**ಅಧಿಸೂಚನೆ ನಂ. 01/2012, ದಿನಾಂಕ : 6ನೇ ಫೆಬ್ರುವರಿ 2012.**

**ಸಂಖ್ಯೆ : ಆಡಳಿತ : 218 : 2012, ಧಾರವಾಡ, ದಿನಾಂಕ : 6ನೇ ಫೆಬ್ರುವರಿ 2012.**

**ವಿಷಯ :** ಶೀಘ್ರಲಿಪಿಗಾರರು, ಬೆರಳಚ್ಚುಗಾರರು ಮತ್ತು ಬೆರಳಚ್ಚು–ನಕಲುಗಾರರು, ಆದೇಶ ಜಾರಿಕಾರರು ಮತ್ತು ಜವಾನ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಕುರಿತು.

**ಉಲ್ಲೇಖ :**

1. ಉಚ್ಛ ನ್ಯಾಯಾಲಯ, ಬೆಂಗಳೂರು ಪತ್ರ ಸಂಖ್ಯೆಃಎಲ್‌ಸಿಎ II/205/2004, ದಿನಾಂಕಃ 17–06–2009.
2. ಉಚ್ಛ ನ್ಯಾಯಾಲಯ, ಬೆಂಗಳೂರು ಪತ್ರ ಸಂಖ್ಯೆಃಎಲ್‌ಸಿಎ– II/164/2009, ದಿನಾಂಕಃ 18–03–2010.
3. ಉಚ್ಛ ನ್ಯಾಯಾಲಯ, ಬೆಂಗಳೂರು ಪತ್ರ ಸಂಖ್ಯೆಃಎಲ್‌ಸಿಎ– I/220/1996, ದಿನಾಂಕಃ 08–03–2010.
4. ಉಚ್ಛ ನ್ಯಾಯಾಲಯ, ಬೆಂಗಳೂರು ಪತ್ರ ಸಂಖ್ಯೆಃಎಲ್‌ಸಿಎ– II/36/2003, ದಿನಾಂಕಃ 23–06–2011.
5. ಉಚ್ಛ ನ್ಯಾಯಾಲಯ, ಬೆಂಗಳೂರು ಪತ್ರ ಸಂಖ್ಯೆಃಎಲ್‌ಸಿಎ– II/54/2011, ದಿನಾಂಕಃ 01–10–2011.

ಮೇಲ್ಕಂಡ ಅಧಿಸೂಚನೆಯನ್ವಯ ಧಾರವಾಡ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಹಾಗೂ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಹಾಗೂ ಹೊಸದಾಗಿ ಸೃಜಿಸಲಾಗಿರುವ ಒಟ್ಟು 21–ಶೀಘ್ರಲಿಪಿಗಾರರು, 3–ಬೆರಳಚ್ಚುಗಾರರು, 1–ಬೆರಳ್ಳಚ್ಚು–ನಕಲುಗಾರ, 9–ಆದೇಶ ಜಾರಿಕಾರರು ಮತ್ತು 12–ಜವಾನರ ಹುದ್ದೆಗ ಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿ ಸಲ್ಲಿಸಲು ನಿಗದಿತ ಪಡಿಸಿರುವ ಕೊ ನೆಯ ದಿನಾಂಕಃ 12–03–2012 ಸಂಜೆ 5.00 ಗಂಟೆ.**

1. **ಶೀಘ್ರಲಿಪಿಗಾರರು (Stenographer) :–ಹುದ್ದೆಗ ಳ ಸಂಖ್ಯೆಃ 21**

**ವೇತ ನ ಶ್ರೇಣಿ :** 7275–175–7800–200–8600–225–9500–250–10500–300–12300–350–13350

**ಹುದ್ದೆಗಳ ವರ್ಗೀಕರಣ :**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ. | ಯೋ.ೀ.ಅ. | ಅಂ.ಅ | ಒಟ್ಟು |
|---|---|---|---|---|---|---|---|---|
| ಪ.ಜಾ. | 1 | 2 | 2 | – | – | – | – | 5* |
| ಪ.ಪಂ. | – | 1 | – | – | – | – | – | 1 |
| ಪ್ರವರ್ಗ–2A | 1 | 1 | 1 | – | – | – | – | 3 |
| ಪ್ರವರ್ಗ–2B | – | 1 | – | – | – | – | – | 1 |
| ಪ್ರವರ್ಗ–3A | – | 1 | – | – | – | – | – | 1 |
| ಪ್ರವರ್ಗ–3B | – | 1 | – | – | – | – | – | 1 |
| **ಸಾ.ಅ** | **2** | **3** | **2** | **1** | – | – | **1**** | **9** |
| **ಒಟ್ಟು** | **4** | **10** | **5** | **1** | – | – | **1** | **21** |

* 2 ಬ್ಯಾಕ್‌ಲಾಗ್ ಹುದ್ದೆಗಳು ಸೇರಿ ** ದೃಷ್ಟಿಮಾಂದ್ಯತೆ ಉಳ್ಳವರಿಗೆ.

**ವಿದ್ಯಾರ್ಹತೆಃ**

(ಎ) ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕಡೆಯ ದಿನಾಂಕದಂದು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗ ಡೆ ಹೊಂದಿರಬೇಕ ು.

(ಬಿ) ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪ್ರೌಢ ದರ್ಜೆ (Senior Grade) ಹಾಗೂ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಪ್ರೌಢದರ್ಜೆ (Senior Grade) ಪರೀಕ್ಷೆಯಲ್ಲಿ ತೇರ್ಗಡೆ ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

2. **ಬೆರಳಚ್ಚುಗಾರರು (Typist):–ಹುದ್ದೆಗ ಳ ಸಂಖ್ಯೆಃ 3**

**ವೇತನ ಶ್ರೇಣಿ :** 5800–100–6000–125–6500–150–7100–175–7800–200–8600–225–9500–250–10500

**ಹುದ್ದೆಗಳ ವರ್ಗೀಕರಣ :**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ. | ಯೋ ೕ.ಅ. | ಅಂ.ಅ | ಒಟ್ಟು |
|---|---|---|---|---|---|---|---|---|
| ಪ್ರವರ್ಗ–2A | 1 | – | – | – | – | – | – | 1 |
| ಪ್ರವರ್ಗ–3A | – | 1 | – | – | – | – | – | 1 |
| **ಸಾ.ಅ** | – | – | **1** | – | – | – | – | **1** |
| **ಒಟ್ಟು** | **1** | **1** | **1** | –‘ | – | – | **1** | **3** |

**ವಿದ್ಯಾರ್ಹತೆಃ**

(ಎ) ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕಡೆಯ ದಿನಾಂಕದಂದು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

(ಬಿ) ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪ್ರೌಢ ದರ್ಜೆ (Senior Grade) ಪರೀಕ್ಷೆಯಲ್ಲಿ ತೇರ್ಗಡೆ ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**3. ಬೆರಳಚ್ಚು ನಕಲುಗಾರರು (Typist-Copyist) : ಹುದ್ದೆಗಳ ಸಂಖ್ಯೆಃ 1**

**ವೇತನ ಶ್ರೇಣಿ :** 5800–100–6000–125–6500–150–7100–175–7800–200–8600–225–9500–250–10500

**ಹುದ್ದೆಗಳ ವರ್ಗೀಕರಣ :**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ. | ಯೋ ೕ.ಅ. | ಅಂ.ಅ | ಒಟ್ಟು |
|---|---|---|---|---|---|---|---|---|
| **ಸಾ.ಅ** | – | – | **1** | – | – | – | – | **1** |
| **ಒಟ್ಟು** | – | – | **1** | – | – | – | – | **1** |

**ವಿದ್ಯಾರ್ಹತೆಃ**

(ಎ) ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕಡೆಯ ದಿನಾಂಕದಂದು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

(ಬಿ) ಕನ್ನಡ ಮತ್ತು ಆಂಗ್ಲ ಎರಡೂ ಭಾಷೆಯಲ್ಲಿ ಕಿರಿಯ ಶ್ರೇಣಿ ಬೆರಳಚ್ಚು (Junior Grade) ಪರೀಕ್ಷೆಯಲ್ಲಿ ತೇರ್ಗಡೆ ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**4. ಆದೇಶ ಜಾರಿಕಾರರು (Process-Server) : ಹುದ್ದೆಗಳ ಸಂಖ್ಯೆಃ 9**

**ವೇತನ ಶ್ರೇಣಿ :** 5500–100–6000–125–6500–150–7100–175–7800–200–8600–225–9500

**ಹುದ್ದೆಗಳ ವರ್ಗೀಕರಣ :**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ. | ಯೋ ೕ.ಅ. | ಅಂ.ಅ | ಒಟ್ಟು |
|---|---|---|---|---|---|---|---|---|
| ಪ.ಜಾ. | 1 | – | – | – | – | – | – | 1 |
| ಪ.ಪಂ. | – | 1 | – | – | – | – | – | 1 |
| ಪ್ರವರ್ಗ–2ಂ | – | – | 1 | – | – | – | – | 1 |
| ಪ್ರವರ್ಗ–2ಃ | – | 1 | – | – | – | – | – | 1 |
| **ಸಾ.ಅ** | **2** | **1** | – | **1** | – | **1** | – | **5** |
| **ಒಟ್ಟು** | **3** | **3** | **1** | **1** | – | **1** | – | **9** |

**ವಿದ್ಯಾರ್ಹತೆಃ**

ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕಡೆಯ ದಿನಾಂಕದಂದು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. ಲಘು/ಭಾರಿ ವಾಹನಾ ಚಾಲನಾ ಪರವಾನಗಿ ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**5. ಜವಾನ (Peon) : ಹುದ್ದೆಗಳ ಸಂಖ್ಯೆಃ 12**

**ವೇತನ ಶ್ರೇಣಿ :** 4800–100–6000–125–6500–150–7100–175–7275

**ಹುದ್ದೆಗಳ ವರ್ಗೀಕರಣ :**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ. | ಯೋ.ನಿ.ಅ. | ಅಂ.ಅ | ಒಟ್ಟು |
|---|---|---|---|---|---|---|---|---|
| ಪ.ಜಾ. | – | 1 | – | – | 1 | – | – | 2 |
| ಪ್ರವರ್ಗ–2A | – | – | 1 | – | 1 | – | – | 2 |
| ಪ್ರವರ್ಗ–2B | – | – | – | – | – | – | 1* | 1 |
| ಪ್ರವರ್ಗ–3B | – | – | – | – | – | – | 1* | 1 |
| **ಸಾ.ಅ** | **1** | **2** | **2** | – | – | – | **1**** | **6** |
| **ಒಟ್ಟು** | **1** | **3** | **3** | – | **2** | – | **3** | **12** |

* ದೃಷ್ಟಿಮಾಂದ್ಯತೆ ಉಳ್ಳವರಿಗೆ.

** ಶ್ರವಣದೋಷ ಉಳ್ಳವರಿಗೆ.

**ವಿದ್ಯಾರ್ಹತೆಃ**

ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕಡೆಯ ದಿನಾಂಕದಂದು 7ನೇ ತರಗತಿಯ ಪರೀಕ್ಷೆಯಲ್ಲಿ ತೇರ್ಗಡೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

**ಆಯ್ಕೆ ವಿಧಾನ ಃ**

ಮೇಲ್ಕಾಣಿಸಿದ ಎಲ್ಲ ಹುದ್ದೆಗಳನ್ನು ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರ ಹುದ್ದೆಗಳ) ನೇಮಕಾತಿ (ತಿದ್ದುಪಡಿ) ನಿಯಮಗಳು 2007ರ ಪ್ರಕಾರ ನೇಮಕಾತಿಯನ್ನು ನಡೆಸಲಾಗುವುದು.

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಲ್ಲಿ ಮಹಿಳಾ ಅಭ್ಯರ್ಥಿಗಳು, ಮಾಜಿ ಸೈನಿಕ ಅಭ್ಯರ್ಥಿಗಳು, ಅಂಗವಿಕಲ ಅಭ್ಯರ್ಥಿಗಳು, ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ಗ್ರಾಮೀಣ ಅಭ್ಯರ್ಥಿಗಳು ಹಾಗೂ ಕನ್ನಡ ಮಾಧ್ಯಮ ಅಭ್ಯರ್ಥಿಗಳ ಮೀಸಲಾತಿಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ ಇನ್ನುಳಿದ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

**ವಯೋಮಿತಿ :**

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ 18 ವರ್ಷ ವಯೋಮಿತಿ ಹೊಂದಿರಬೇಕು ಹಾಗೂ ಈ ಕಳಗೆ ತಿಳಿಸಿರುವಂತೆ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

1. ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗ ಹಾಗೂ ಪ್ರವರ್ಗ–1 ರ ಹಿಂದುಳಿದ ವರ್ಗದ ಅಭ್ಯರ್ಥಿಗಳಿಗೆ ಸಂಬಂಧಿಸಿದ ಪ್ರಾಧಿಕಾರ ನೀಡುವ ಜಾತಿ ದೃಢೀಕರಣ ಪತ್ರ ಹಾಜರುಪಡಿಸಿದಲ್ಲಿ ಗರಿಷ್ಠ 40 ವರ್ಷ.
2. ಪ್ರವರ್ಗ 2–ಎ, 2–ಬಿ, 3–ಎ, 3–ಬಿ ಗಳಿಗೆ ಸೇರಿದ ಅಭ್ಯರ್ಥಿಗಳಿಗೆ ಸಂಬಂಧಿಸಿದ ಪ್ರಾಧಿಕಾರ ನೀಡುವ ಜಾತಿ ದೃಢೀಕರಣ ಪತ್ರ ಹಾಜರುಪಡಿಸಿದಲ್ಲಿ ಗರಿಷ್ಠ 38 ವರ್ಷ.
3. ಸಾಮಾನ್ಯ ವರ್ಗದ ಅಭ್ಯರ್ಥಿಗಳಿಗೆ 35 ವರ್ಷ.

**ವಯೋಮಿತಿ ಸಡಿಲಿಕೆ :**

ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯವರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಖಾಯಂಪೂರ್ವ ಸೇವಾವಧಿ :**

ಆಯ್ಕೆಗೊಂಡ ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ಅಡಿಯಲ್ಲಿ 2 ವರ್ಷಗಳ ಕಾಲದ ಪರಿವೀಕ್ಷಣಾ ಅವಧಿಯನ್ನು ನಿಗದಿಪಡಿಸಿದ್ದು ಸದರಿ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಹಾಗೂ ಇತರ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕಾಗುತ್ತದೆ.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ :**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣೆ ಪ್ರಮಾಣ ಪತ್ರವನ್ನು ಪಡೆದು ಅರ್ಜಿಯನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸತಕ್ಕದ್ದು.

**ಅರ್ಜಿ ಸಲ್ಲಿಸುವ ವಿಧಾನ :**

ಈ ಪ್ರಕಟಣೆಯೊಂದಿಗೆ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಪ್ರತಿ/ಗಣಕೀಕೃತ ಪ್ರತಿಯಲ್ಲಿ ತಯಾರಿಸಿ ತಮ್ಮ ಸ್ವಹಸ್ತಾಕ್ಷರದಲ್ಲಿ ಭರ್ತಿ ಮಾಡಿ ಸ್ವಯಂ ದೃಢೀಕೃತ ಪಾಸ್‌ಪೋರ್ಟ್ ಗಾತ್ರದ ಭಾವಚಿತ್ರವನ್ನು ಅಂಟಿಸಿದ ಮತ್ತು ಮೀಸಲಾತಿ, ವಯೋಮಿತಿ, ವಿದ್ಯಾರ್ಹತೆ, ಜಾತಿಗಳಿಗೆ ಸಂಬಂಧಿಸಿದ ನಿಗದಿತ ಪ್ರಾಧಿಕಾರದವರು ನೀಡಿದ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ–580 008., ದಿನಾಂಕಃ 12–03–2012 ರ ಸಂಜೆ 5–00 ಗಂಟೆ ಒಳಗೆ ತಲುಪುವಂತೆ ಕಳುಹಿಸತಕ್ಕದ್ದು. ಅರ್ಜಿದಾರರು ಯಾವ ಹುದ್ದೆಗೆ ಅರ್ಜಿಗಳನ್ನು ಸಲ್ಲಿಸುತ್ತಾರೆ ಎಂಬುವದನ್ನು ದಪ್ಪ ಅಕ್ಷರದಲ್ಲಿ ಲಕೋಟೆಯ ಮೇಲೆ ನಮೂದಿಸತಕ್ಕದ್ದು.

**ಪ್ರಮುಖವಾದ ಸೂಚನೆಗಳು :**

ಅರ್ಜಿಯೊಂದಿಗೆ ಅಭ್ಯರ್ಥಿಗಳು ಕೆಳಕಂಡ ದಾಖಲೆಗಳ ಒಂದೊಂದು ಛಾಯಾ ಪ್ರತಿ (ಫೋಟೋ ಕಾಪಿ/ಜೆರಾಕ್ಸ್)ಗಳನ್ನು ಸ್ವಯಂ–ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು. (ಮೂಲಪ್ರತಿಗಳನ್ನು ಲಗತ್ತಿಸಬಾರದು).

**ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳು :**

1. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/7ನೇ ತರಗತಿಯ ವಿದ್ಯಾರ್ಹತೆ ಹೊಂದಿರುವವರಿಗೆ ಜನನ ದಿನಾಂಕವನ್ನು ನಮೂದಿಸಿರುವ ಅಂಕಪಟ್ಟಿ ಅಥವಾ ವರ್ಗಾವಣೆ ಪ್ರಮಾಣ ಪತ್ರ.

2. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಅಭ್ಯರ್ಥಿಗಳು ನಮೂನೆ 'ಡಿ'ಯಲ್ಲಿ, ಪ್ರವರ್ಗ–1ರ ನಮೂನೆ 'ಇ'ಯಲ್ಲಿ ಮತ್ತು 2ಎ, 2ಬಿ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್'ನಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.

3. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ/96/ಸೇನನಿ/2005, ದಿನಾಂಕಃ 10–08–2005 ರ ಪ್ರಕಾರ ನಿಗದಿತ ನಮೂನೆ–2 ರಲ್ಲಿ ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

4. ಗ್ರಾಮೀಣ ಮಿಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ–2ರ ಜೊತೆ ನಮೂನೆ–1 ರಲ್ಲೂ ದೃಢೀಕರಣ ಪತ್ರವನ್ನು ಸಲ್ಲಿಸಬೇಕು.

5. ಕನ್ನಡ ಮಾಧ್ಯಮ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂದಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.

6. ಅಂಗವಿಕಲ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕಃ 19–11–2005ರ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ : ಸಿಆಸುಇ/ 115/ಸೇನನಿ/2005 ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸಬೇಕು.

7. ಯೋಜನಾ ನಿರಾಶ್ರಿತ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ/44/ಸೇನನಿ/2001, ದಿನಾಂಕ : 27.07.2001 ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.

8. ಮಾಜಿ ಸೈನಿಕ ಮಿಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ/ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣಪತ್ರವನ್ನು ಸಲ್ಲಿಸಬೇಕು.

9. ವಾಹನ ಚಾಲನೆಯ ಪರವಾನಿಗೆ ಪತ್ರ (ಆದೇಶ ಜಾರಿಕಾರರ ಹುದ್ದೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಮಾತ್ರ).

10. ವಿಧವೆಯರು, ಜೀತ ಕಾರ್ಮಿಕರು ಹಾಗೂ ವಯೋಮಿತಿ ರಿಯಾಯಿತಿಗೆ ಅರ್ಹರಾದ ಇನ್ನಿತರರು ವಯೋಮಿತಿ ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರರಿಂದ ಪಡೆದ ಪ್ರಮಾಣಪತ್ರವನ್ನು ಸಲ್ಲಿಸಬೇಕು.

11. ಅಭ್ಯರ್ಥಿಯು ಕೊನೆಯಲ್ಲಿ ವಿದ್ಯಾಭ್ಯಾಸ ಮಾಡಿದ ಶಾಲಾ/ಕಾಲೇಜಿನ ಮೂಖ್ಯೋಪಾಧ್ಯಾಯರು/ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಲಗತ್ತಿಸಬೇಕು.

12. ಅಭ್ಯರ್ಥಿಯ ನಡತೆಯನ್ನು ದೃಢೀಕರಿಸುವ ಬಗ್ಗೆ ಅವನು ಓದಿರುವ ವಿದ್ಯಾಸಂಸ್ಥೆಗಳಿಗೆ ಸಂಬಂಧಪಡದ ಹಾಗೂ ಅಭ್ಯರ್ಥಿಯ ಸಂಬಂಧಗಳಲ್ಲದ ಇಬ್ಬರು ಸ್ಥಳೀಯ ಗಣ್ಯವ್ಯಕ್ತಿಗಳಿಂದ ಪಡೆದ 6 ತಿಂಗಳ ಈಚೆಗಿನ ಎರಡು ನಡತೆ ಪ್ರಮಾಣ ಪತ್ರಗಳು.

13. ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣಪತ್ರಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದು ಕೊಂಡಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ದೃಢೀಕರಿಸಿರಬೇಕು.

**ಇತರೆ ಸೂಚನೆಗಳು :**

1. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
2. ಅರ್ಜಿಯೊಂದಿಗೆ 5 ರೂಪಾಯಿಯ ಅಂಚೆ ಚೀಟಿ (Postal Stamp)ಯನ್ನು ಹೊಂದಿರುವ ಸ್ವ–ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.
3. ಅರ್ಜಿಯೊಂದಿಗೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಸ್ವಯಂ ದೃಢೀಕರಿಸಿ ಲಗತ್ತಿಸಬೇಕು.
4. ಶೀಘ್ರಲಿಪಿಗಾರರು, ಬೆರಳಚ್ಚುಗಾರರು ಮತ್ತು ಬೆರಳಚ್ಚು–ನಕಲುಗಾರರ ಹುದ್ದೆಗಳಿಗೆ ಎಲ್ಲಾ ಅರ್ಹ ಅಭ್ಯರ್ಥಿಗಳಿಗೂ ಅರ್ಹತಾ–ಸ್ಪರ್ಧಾತ್ಮಕ ಪರೀಕ್ಷೆ ನಡೆಸಲಾಗುವುದು.
5. ಸಂದರ್ಶನಕ್ಕೆ ಆಯ್ಕೆಯಾದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿಯೇ ಸಂದರ್ಶನಕ್ಕೆ ಹಾಜರಾಗಬೇಕು ಹಾಗೂ ಸಂದರ್ಶನ ಪತ್ರ ಬರೆದಿರುವ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಲ್ಲವೆಂದು ಭಾವಿಸಿಕೊಳ್ಳತಕ್ಕದ್ದು.
6. ಆಯ್ಕೆಯ ಸಂಬಂಧವಾಗಿ ಸಂದರ್ಶನಕ್ಕೆ ಅನರ್ಹರಾದ ಅಭ್ಯರ್ಥಿಗಳು ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಅಸ್ಪದವಿರುವುದಿಲ್ಲ.
7. ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸ ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

**ಕೆ. ನಟರಾಜನ್**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಧಾರವಾಡ.

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡದಲ್ಲಿ ________________ ಹುದ್ದೆಗೆ ಅರ್ಜಿಯ ನಮೂನೆ

ಪಾಸ್ ಪೋರ್ಟ್ ಅಳತೆಯ ಸ್ವಯಂದೃಢೀಕೃತ ಭಾವಚಿತ್ರವನ್ನು ಅಂಟಿಸಬೇಕು.

**ಗೆ,**

**ಮಾನ್ಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,**

**ಧಾರವಾಡ.**

ತಮ್ಮ ಕಛೇರಿ ಅಧಿಸೂಚನೆ 01/2012, ದಿನಾಂಕಃ 06–02–2012 ರ ಮೇರೆಗೆ ನಾನು __________ ಹುದ್ದೆಗೆ ಈ ಮೂಲಕ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸುತ್ತಿದ್ದೇನೆ.

| | | | | |
|---|---|---|---|---|
| 1 | ಅಭ್ಯರ್ಥಿಯ ಪೂರ್ಣ ಹೆಸರು | | | |
| 2 | ತಂದೆ/ಗಂಡನ ಹೆಸರು | | | |
| 3 | ತಾಯಿಯ ಹೆಸರು | | | |
| 4 | ಜನ್ಮ ದಿನಾಂಕ | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ ದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು |
| 6 | ಲಿಂಗ | | | |
| 7 | ರಾಷ್ಟ್ರೀಯತೆ | | | |
| 8 | ಧರ್ಮ ಮತ್ತು ಜಾತಿ | | | |

| | | | | | |
|---|---|---|---|---|---|
| 9 | ವೈವಾಹಿಕ ಸ್ಥಿತಿ | ವಿವಾಹಿತ (  ) | | ಅವಿವಾಹಿತ (  ) | |
| 10 | ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡ ತಿ ಇದ್ದಾರೆಯೇ ? | | | | |
| 11 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರಾ? | ಹೌದು (  ) | | ಇಲ್ಲ (  ) | |
| 12 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ಯಾವುದಾದರೂ ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆ ದುಹಾಕಲ್ಪಟ್ಟಿದ್ದೀರಾ? | ಹೌದು (  ) | | ಇಲ್ಲ (  ) | |
| 13 | ಯಾವ ವರ್ಗ/ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುತ್ತಿದ್ದೀರಿ? (ಕೋ ೇರುವ ಮೀಸಲಾತಿಯನ್ನು ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು). | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ–1 | |
| | | | | | | |
| | | 2ಎ | 2ಬಿ | 3ಎ | 3ಬಿ | |
| | | | | | | |
| 14 | ನೀವು ಈ ಯಾವುದಾದರೂ ಮೀಸಲಾತಿ ಅಡಿಯಲ್ಲಿ ಬರುತ್ತೀರಾ? (ಸೇರುವ ಮಿಸಲಾತಿಯನ್ನು ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸ ಬೇಕು) | ಗ್ರಾ.ಅ | ಕ.ಮಾ.ಅ | ಮಾ.ಸೈ | ಅಂ.ಅ | ಯೋ.ಅ |
| | | | | | | |
| 15 | ಶೈಕ್ಷಣಿಕ ವಿದ್ಯಾರ್ಹತೆ (ಸ್ವಯಂ ದೃಢೀಕೃತ ಪತ್ರಗಳನ್ನು ಸಲ್ಲಿಸತಕ್ಕದ್ದು). | ಉತ್ತೀರ್ಣ ಹೊ ಂದಿದ ವರ್ಷ | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | % ಅಂಕಗಳು | |
| ಎ | 7ನೇ ತರಗತಿ | | | | | |
| ಬಿ | ಎಸ್.ಎಸ್.ಎಲ್.ಸಿ/ತತ್ಸಮಾನ ವಿದ್ಯಾರ್ಹತೆ | | | | | |
| ಸಿ | ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ ಪರೀಕ್ಷೆ | | | | | |
| ಡಿ | ಆಂಗ್ಲ ಶೀಘ್ರಲಿಪಿ ಪ್ರೌಢದರ್ಜೆ ಪರೀಕ್ಷೆ | | | | | |
| ಇ | ಹಿರಿಯ ದರ್ಜೆ ಆಂಗ್ಲ ಬೆರಳಚ್ಚು ಪರೀಕ್ಷೆ | | | | | |
| ಎ ಫ್ | ಹಿರಿಯ ದರ್ಜೆ ಕನ್ನಡ ಬೆರಳಚ್ಚು ಪರೀಕ್ಷೆ | | | | | |
| ಜಿ | ಕಿರಿಯ ದರ್ಜೆ ಆಂಗ್ಲ ಬೆರಳಚ್ಚು ಪರೀಕ್ಷೆ | | | | | |
| ಎಚ್ | ಕಿರಿಯ ದರ್ಜೆ ಕನ್ನಡ ಬೆರಳಚ್ಚು ಪರೀಕ್ಷೆ | | | | | |
| ಐ | ಇತರೆ ಯಾವುದೇ ವಿದ್ಯಾರ್ಹತೆ (ಸೂಚನೆಃ ಅನ್ವಯಿಸುವ ವಿದ್ಯಾರ್ಹತೆಯ ಅಂಕಣಗಳನ್ನು ಮಾತ್ರ ಭರ್ತಿ ಮಾಡುವುದು). | | | | | |
| 16 | ನೀವು ವಾಹನ ಚಾಲನೆಯ ಲೈಸೆನ್ಸ್ ಹೊ ಂದಿದ್ದೀರಾ? (ಸ್ವಯಂ ದೃಢೀಕರಿಸಿದ ಚಾಲ್ತಿಯಲ್ಲಿರುವ ವಾಹನ ಚಾಲನಾ ರಹದಾರಿ ನಕಲನ್ನು ಲಗತ್ತಿಸಬೇಕು. ಜಾರಿಕಾರರ ಹುದ್ದೆಗೆ ಮಾತ್ರ ಅನ್ವಯವಾಗುತ್ತದೆ. | ಲಘು ವಾಹನ ಪರವಾನಿಗೆ ಪತ್ರ | | ಭಾರೀ ವಾಹನ ಪರವಾನಿಗೆ ಪತ್ರ | | |
| | | | | | | |

| | | | |
|---|---|---|---|
| 17 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರು ವಿರಾ? (ಸರ್ಕಾರಿ ಸೇವೆಯಲ್ಲಿದ್ದಲ್ಲಿ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇ ಪಣ ಪತ್ರದ ನಕಲನ್ನು ಲಗತ್ತಿಸಬೇಕು). | ಹೌದು ( ) | ಇಲ್ಲ ( ) |
| 18 | ಅಭ್ಯರ್ಥಿಯ ತಾತ್ಕಾಲಿಕ ವಿಳಾಸ ಮತ್ತು ದೂರವಾಣಿ ಸಂಖ್ಯೆ. | | |
| 19 | ಅಭ್ಯರ್ಥಿಯ ಖಾಯಂ ವಿಳಾಸ ಮತ್ತು ದೂರವಾಣಿ ಸಂಖ್ಯೆ. | | |
| 20 | ನಿಮ್ಮ ಸ್ವವಿಳಾಸವಿರುವ ರೂ.5/–ರ ಅಂಚೆ ಚೀಟಿ ಅಂಟಿಸಿರುವ ಲಕೋ ೀಟೆಯನ್ನು ಲಗತ್ತಿ ಸಿದ್ದೀರ? | | |

ಈ ಮೇ ಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿವೆಯೆಂದು ಪ್ರಮಾಣೀಕರಿಸುತ್ತೇನೆ ಮತ್ತು ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡುಬಂದಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದುಪಡಿಸಬಹುದು ಎಂದು ಈ ಮೂಲಕ ಘೋಷಿಸುತ್ತೇ ನೆ.

ದಿನಾಂಕ :

ಸ್ಥಳ : **ಅಭ್ಯರ್ಥಿಯ ಸಹಿ.**

**ಪಿ.ಆರ್. ನಂ. 33**

## ಆಯುಕ್ತರವರ ಕಾರ್ಯಾಲಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, 2ನೇ ಮಹಡಿ, ಸರ್.ಎಂ. ವಿಶ್ವೇಶ್ವರಯ್ಯ ಚಿಕ್ಕಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು–1

### ಅಧಿಸೂಚನೆ

**ಸಂ. ಆಪಸಂ/ಸಿ–2/ವಿವ–102/11–12, ಬೆಂಗಳೂರು, ದಿನಾಂಕ: 23/24.01.2012**

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ0ುಲ್ಲಿ ಖಾಲಿಯಿರುವ 16 ಪಶುವೈದ್ಯಾಧಿಕಾರಿಗಳ ಹುದ್ದೆಗೆ ನಿವೃತ್ತ ಪಶುವೈದ್ಯಾಧಿಕಾರಿಗಳ ನೇಮಕಾತಿ ಮಾಡಲು ಸರ್ಕಾರದ ಆದೇಶ ಸಂ. ಪಸಂಮೀ/116/ಪಸಸೇ/2008 ದಿನಾಂಕ: 07.02.2009 ರಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ (ಸಾಮಾನ್ಯ ನೇಮಕಾತಿ) 1977 ರ ನಿಯಮ 15 ರ ಪ್ರಕಾರ ನೀಡಲಾದ ಅನುಮತಿ ಮೇರೆಗೆ ಈಗಾಗಲೇ 10(ಹತ್ತು) ಹುದ್ದೆಗಳಿಗೆ ನೇಮಕಾತಿ ನೀಡಲಾಗಿತ್ತು. ಉಳಿದ 6 (ಆರು) ಹುದ್ದೆಗಳಿಗೆ ಈ ಕಛೇರಿ ಅಧಿಸೂಚನೆ ಸಂ. ಆಪಸಂ/ಸಿ–2/ವಿವ–102/11–12 ದಿನಾಂಕ: 26.10.2011ರಲ್ಲಿ ಪ್ರಕಟಣೆ0ುನ್ನು ಹೊರಡಿಸಲಾಗಿತ್ತು. ಸದರಿ ಪ್ರಕಟಣೆಯಂತೆ ನಿವೃತ್ತ ಪಶುವೈದ್ಯರಿಗೆ ದಿನಾಂಕ: 31.10.2011ರ ಸಂಜೆ 5.00 ಘಂಟೆಯ ಒಳಗೆ ಸ್ವೀಕೃತವಾದ ಅರ್ಜಿಗಳಲ್ಲಿ ಅರ್ಹ ಅರ್ಜಿದಾರರಿಗೆ ಅವರವರ ಹೆಸರಿನ ಮುಂದೆ ಕಾಣಿಸಿರುವ ಸ್ಥಳಕ್ಕೆ ಕೆಳಕಂಡ 14 ಷರತ್ತು ಹಾಗೂ ನಿಬಂಧನೆಗೊಳಪಟ್ಟು ಸರ್ಕಾರದ ಆದೇಶ ಸಂ. ಪಸಂಮೀ/237/ಪಸಸೇ/2009 ದಿನಾಂಕ: 18.08.2009ರ ಆದೇಶದನ್ವಯ ಮಾಹೆ0ಾನ ರೂ. 13,000/– (ಹದಿಮೂರು ಸಾವಿರ ರೂ.ಗಳು ಮಾತ್ರ) ಸಂಚಿತ ವೇತನದ ಆಧಾರದ ಮೇಲೆ 2 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮರು ನೇಮಕಾತಿ ಮಾಡಲಾಗಿದೆ.

**ಷರತ್ತು:**

1. ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ನಿವೃತ್ತ ಪಶುವೈದ್ಯಾಧಿಕಾರಿಗಳನ್ನು ಪಶುವೈದ್ಯಾಧಿಕಾರಿಗಳ ಹುದ್ದೆಯಲ್ಲಿ ಗುತ್ತಿಗೆ ಮೇಲೆ ನೇಮಕಗೊಂಡಿರುವ ಡಾ: ______________________ ರವರ ಗುತ್ತಿಗೆ ನೇಮಕಾತಿ ಎರಡು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿ0ುವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಡಾ: __________________ ರವರು ಪಡೆ0ುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 13,000/– ಮರುನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ ಹಾಗೂ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಮಾತ್ರ ಪಡೆಯಲು ಅರ್ಹರಿರುತ್ತಾರೆಯೆ ವಿನಃ ಬೇರೆ ಯಾವುದೇ ಭತ್ಯೆಗಳನ್ನು ಪಡೆ0ುವಂತಿಲ್ಲ.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ, ವೇತನ ಬಡ್ತಿ, ಪದೋನ್ನತಿ, ಪಿಂಚಣಿ, ಟರ್ಮಿನಲ್ ಲೀವ್ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳು ಅರ್ಹರಾಗಿರುವುದಿಲ್ಲ.

6. ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳು ಅವರ ದುರ್ವರ್ತನೆ, ನಿರ್ಲಕ್ಷ್ಯತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರುನೇಮಕಾತಿಯ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತರ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ, ಜವಾಬ್ದಾರಿ ಹಾಗೂ ಅವರಿಗೆ ವಹಿಸಿರುವ ಕಾರ್ಯ, ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ನೆರವೇರಿಸುವುದು.
9. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ಕರ್ತವ್ಯ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. ಅವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ಕ್ಕೆ ಬದ್ಧರಾಗಿರತಕ್ಕದ್ದು.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಗುತ್ತಿಗೆ ಪಶುವೈದ್ಯಾಧಿಕಾರಿಗಳು ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಭಂಧಿಸಿದಂತೆ ಆಗಲಿರುವ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಗಾರರಾಗಿರುತ್ತಾರೆ.
13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50/–) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳಿಂದ ಬರೆಸಿಕೊಳ್ಳತಕ್ಕದ್ದು.
14. ಈ ಅಭ್ಯರ್ಥಿಗಳನ್ನು ಯಾವುದೇ ಕಾರಣ ನೀಡದೆ ಮುನ್ಸೂಚನೆ ಇಲ್ಲದೆ ಗುತ್ತಿಗೆ ನೇಮಕಾತಿ ರದ್ದುಪಡಿಸಲು ಈ ಪ್ರಾಧಿಕಾರಕ್ಕೆ ಅಧಿಕಾರವಿರುತ್ತದೆ.

ಅಭ್ಯರ್ಥಿಯು ಪಶುಪಾಲನಾ ಇಲಾಖೆಗೆ ಸಂಬಂಧಪಟ್ಟ ಉಪ ನಿರ್ದೇಶಕರ ಸಮ್ಮುಖದಲ್ಲಿ ಆದೇಶ ತಲುಪಿದ 07 ದಿನದೊಳಗಾಗಿ ಹಾಜರಾಗತಕ್ಕದ್ದು ಹಾಗೂ ರೂ. 50/–ರ ಮೌಲ್ಯದ ಛಾಪಾ ಕಾಗದದಲ್ಲಿ (ಡಾಕ್ಯುಮೆಂಟ್ ಶೀಟ್) ಷರತ್ತು ಮತ್ತು ನಿಬಂಧನೆಗೊಳಪಟ್ಟು ಕರಾರು ಪತ್ರವನ್ನು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಬರೆದುಕೊಡತಕ್ಕದ್ದು. ಇವರುಗಳ ವೇತನವನ್ನು ನೇಮಕಗೊಂಡ ಹುದ್ದೆಗಳಿಗೆ ಅನ್ವಯಿಸುವ ಲೆಕ್ಕ ಶೀರ್ಷಿಕೆಯಡಿಯಲ್ಲಿ ವೇತನ ವೆಚ್ಚವನ್ನು ಭರಿಸತಕ್ಕದ್ದು ಹಾಗೂ ವೇತನವನ್ನು ಸಂಬಂಧಪಟ್ಟ ತಾಲ್ಲೂಕಿನ ಸಹಾಯಕ ನಿರ್ದೇಶಕರವರು ಡ್ರಾ ಮಾಡಿ ವಿತರಿಸತಕ್ಕದ್ದು.

ಟಿಪ್ಪಣಿ ಆಯುಕ್ತರಿಂದ
ಅನುಮೋದಿಸಲ್ಪಟ್ಟಿದೆ

(ಸಹಿ)
ಅಪರ ನಿರ್ದೇಶಕರು (ಆಡಳಿತ)
ಪಶುಪಾಲನಾ ಇಲಾಖೆ, ಬೆಂಗಳೂರು.

**ಅಧಿಸೂಚನೆ ಸಂಖ್ಯೆ. ಆಪಸಂ/ಸಿಬ್ಬಂದಿ–2/ವಿವ–102/2011–12 ದಿನಾಂಕ: 23/24.01.2012**

| ಕ್ರ ಸಂ | ಹೆಸರು | ವಿಳಾಸ | ಹುಟ್ಟಿದ ದಿನಾಂಕ | ಸ್ಥಳ ನಿಯುಕ್ತಿ |
|---|---|---|---|---|
| 1 | ಡಾ: ಎಸ್.ಎಸ್. ಕಳಸಣ್ಣನವರ್ | 1ನೇ ಮುಖ್ಯ ರಸ್ತೆ, 2ನೇ ಅಡ್ಡರಸ್ತೆ, ಮಂಜುನಾಥ ಕಾಲೋನಿ ಶಿವಗಿರಿ, ಧಾರವಾಡ – 7 | 01.05.1949 | ಪಶುಚಿಕಿತ್ಸಾಲಯ ಗಳಗಿ, ಹುಲಕೊಪ್ಪ ಕಲಘಟಗಿ ತಾ: ಧಾರವಾಡ ಜಿಲ್ಲೆ |
| 2 | ಡಾ: ಕೆ. ರಮೇಶ್ | ಸಂ. 4273, 2ನೇ ಮುಖ್ಯ 'ಎ' ರಸ್ತೆ , ಜೆ. ಬ್ಲಾಕ್, 3ನೇ ಹಂತ ದಟ್ಟಗಳ್ಳಿ, ಕನಕದಾಸ ನಗರ, ಮೈಸೂರು – 570 022 | 05.01.1951 | ಪಶುಚಿಕಿತ್ಸಾಲಯ ತೊರೆಮಾವು ನಂಜನಗೂಡು ತಾ: ಮೈಸೂರು ಜಿಲ್ಲೆ |
| 3 | ಡಾ: ವೀರಭದ್ರ ಸ್ವಾಮಿ ಎನ್.ಹೆಚ್ | ಸಂ. ಯು–5, 4ನೇ ಅಡ್ಡರಸ್ತೆ, ಸ್ವಿಮಿಂಗ್ ಪೂಲ್ ಎಕ್ಸ್‌ಟೆನ್ಷನ್, ಪ್ಯಾಲೇಸ್ ಗುಟ್ಟಳ್ಳಿ, ಬೆಂಗಳೂರು – 560 003 | 12.12.1963 | ಪಶುಚಿಕಿತ್ಸಾಲಯ ಅರಸಾಪುರ, ಕೊರಟಗೆರೆ ತಾ: ತುಮಕೂರು ಜಿಲ್ಲೆ |

| ಕ್ರ ಸಂ | ಹೆಸರು | ವಿಳಾಸ | ಹುಟ್ಟಿದ ದಿನಾಂಕ | ಸ್ಥಳ ನಿಯುಕ್ತಿ |
|---|---|---|---|---|
| 4 | ಡಾ: ವಿ.ಎಸ್. ವೀರಣ್ಣಗೌಡ | ಗಂಗಾಪುರ, ಹದಲಿ ಅಂಚೆ, ನರಗುಂದ ತಾ:, ಗದಗ ಜಿಲ್ಲೆ | 01.06.1962 | ಪಶುಚಿಕಿತ್ಸಾಲಯ ಕೋಟಮಚಗಿ, ಗದಗ ತಾ: ಮತ್ತು ಜಿಲ್ಲೆ |
| 5 | ಡಾ: ಕೆ.ಎಸ್. ಶಂಕರ ರಾವ್ | ಸಾಯಿನಾಥ ನಿವಾಸ, ಮಂಜುನಾಥ ನಗರ, ತಾವರೆಕೆರೆ, ಮಾಗಡಿ ಮುಖ್ಯ ರಸ್ತೆ, ಬೆಂಗಳೂರು – 562 130 | 16.05.1951 | ಪಶುಚಿಕಿತ್ಸಾಲಯ ಹಲಸೂರು, ಕನಕಪುರ ತಾ: ರಾಮನಗರ ಜಿಲ್ಲೆ |
| 6 | ಡಾ: ವಿ.ಎಸ್. ಸತ್ಯನಾರಾಯಣ ರೆಡ್ಡಿ | ಭಾಗ್ಯೋದಯ ನಿಲಯ, 9ನೇ ಅಡ್ಡರಸ್ತೆ, ಗಂಗೋತ್ರಿ ನಗರ, ತುಮಕೂರು – 572 102 | 04.05.1951 | ಪಶುಚಿಕಿತ್ಸಾಲಯ ಬಿಗನೇನಹಳ್ಳಿ, ತುರುವೇಕೆರೆ ತಾ: ತುಮಕೂರು ಜಿಲ್ಲೆ |

ಅಪರ ನಿರ್ದೇಶಕರು (ಆಡಳಿತ)
ಪಶುಪಾಲನಾ ಇಲಾಖೆ, ಬೆಂಗಳೂರು

**ಪಿ.ಆರ್. ನಂ. 34**

## ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು–2

### ಅಧಿಸೂಚನೆ

**ಸಂಖ್ಯೆ: ಕಸನಿ:74:ಸಿಬ್ಬಂದಿ1:2008–09, ದಿನಾಂಕ: 13.2.2012**

**ವಿಷಯ:–** ಕಾರವಾರ ಜಿಲ್ಲಾ ರಂಗಮಂದಿರದ ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್‌ವೈಜರ್, ಬ್ಯಾಕ್‌ಲಾಗ್ ಹುದ್ದೆಯನ್ನು ತುಂಬುವ ಕುರಿತು.

ಈ ಇಲಾಖೆಯ ಉ.ಕ.ಜಿಲ್ಲೆ, ಕಾರವಾರ ಇಲ್ಲಿ ಖಾಲಿ ಇರುವ ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್ ವೈಜರ್ ಒಂದು ಹುದ್ದೆಯನ್ನು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್‌ಯಡಿ ಸರ್ಕಾರದ ಅಧಿಸೂಚನೆ ಸಂಖ್ಯೆ **ಡಿಪಿಎಆರ್ 13 ಎಸ್.ಬಿಸಿ 2001, ದಿನಾಂಕ:21.11.2001 ಮತ್ತು 01.06.2002** ರ ಅನ್ವಯ ಭರ್ತಿ ಮಾಡಲು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಅರ್ಹ ಅಭ್ಯರ್ಥಿಗಳಿಂದ ಆಹ್ವಾನಿಸಲಾಗಿದೆ. ಅಭ್ಯರ್ಥಿಗಳು ಈ ಅಧಿಸೂಚನೆಯೊಡನೆ ಪ್ರಕಟಿಸಿರುವ ನಿಗದಿತ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ:17.3.2012 ಸಂಜೆ 5 ಗಂಟೆಯೊಳಗೆ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು–2 ಇಲ್ಲಿಗೆ ತಲುಪಿಸತಕ್ಕದ್ದು.

1. ಖಾಲಿ ಹುದ್ದೆಗಳ ಸಂಖ್ಯೆ : 01 (ಒಂದು)
2. ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್‌ವೈಸರ್
   ಹುದ್ದೆಯ ಮೀಸಲಾತಿ ವರ್ಗೀಕರಣ : ಪರಿಶಿಷ್ಟ ಪಂಗಡ – ಪುರುಷ ಆಭ್ಯರ್ಥಿ
3. ವಯೋಮಿತಿ ವಿದ್ಯಾರ್ಹತೆ ಮತ್ತು ವೇತನ ಶ್ರೇಣಿ
   - **ವಯೋಮಿತಿ :** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ ದಿನಾಂಕ:17.3.2012 ಕ್ಕೆ ಆಭ್ಯರ್ಥಿಗೆ ಕನಿಷ್ಠ 18 ವರ್ಷ ವಯಸ್ಸಾಗಿರಬೇಕು ಮತ್ತು ಗರಿಷ್ಠ 40 ವರ್ಷ ಮೀರಿರಬಾರದು
   - **ವಿದ್ಯಾರ್ಹತೆ :** ಕನ್ನಡವನ್ನು ಒಂದು ವಿಷಯವನ್ನಾಗಿ ತೆಗೆದುಕೊಂಡು ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆ ತೇರ್ಗಡೆಯಾಗಿರಬೇಕು ಇದರೊಂದಿಗೆ ಟೆಲಿಕಮ್ಯೂನಿಕೇಷನ್ (ಸೌಂಡ್ ಹಾಗೂ ಟಿ.ವಿ) ನಲ್ಲಿ ಡಿಪ್ಲೋಮೋ
   - **ವೇತನ ಶ್ರೇಣಿ** : ರೂ. 8825–16000
4. **ಆಯ್ಕೆ ವಿಧಾನ** : ಅಭ್ಯರ್ಥಿಗಳಿಂದ ಅರ್ಜಿಗಳಲ್ಲಿ ಹುದ್ದೆಗೆ ನಿಗದಿಪಡಿಸಿರುವ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳ ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ತಯಾರಿಸಲಾಗುವುದು. ಅರ್ಹತಾ ಪಟ್ಟಿಯನ್ನು ತಯಾರಿಸುವಾಗ ಸರ್ಕಾರದ ಅಧಿಸೂಚನೆ ಸಂಖ್ಯೆ **ಡಿಪಿಎಆರ್**

**13 ಎಸ್‌ಬಿಸಿ 2001 ದಿನಾಂಕ:21.11.2001** ರನ್ವಯ ಕನಿಷ್ಠ 29 ವಯಸ್ಸಾಗಿರುವ ಹಾಗೂ ಗರಿಷ್ಠ 40 ವರ್ಷ ಮೀರಿರದ ಅಭ್ಯರ್ಥಿಗಳಿಗೆ ಪ್ರಥಮ ಆದ್ಯತೆ ನೀಡಲಾಗುವುದು. 29 ವರ್ಷದಿಂದ 40 ವರ್ಷಗೊಳಗಿನ ಅರ್ಹ ಅಭ್ಯರ್ಥಿಯು ದೊರಕದಿದ್ದಲ್ಲಿ, 18 ವರ್ಷದಿಂದ 29 ವರ್ಷ ವಯಸ್ಸಿನೊಳಗಿನ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದು.

5. **ಲಗತ್ತುಗಳು:**

1. ಅರ್ಹತಾ (ಡಿಪ್ಲೋಮ) ಪರೀಕ್ಷೆಯ ಅಂಕಪಟ್ಟಿಯ ನಕಲು ಲಗತ್ತಿಸಿರಬೇಕು.
2. ಜನ್ಮ ದಿನಾಂಕದ ಪ್ರಮಾಣ ಪತ್ರ/ ಎಸ್.ಎಸ್.ಎಲ್.ಸಿ ಅಂಕಪಟ್ಟಿ/ ವರ್ಗಾವಣೆ ಪ್ರಮಾಣ ಪತ್ರದ ನಕಲು ಲಗತ್ತಿಸಬೇಕು.
3. ಪರಿಶಿಷ್ಟ ಪಂಗಡಕ್ಕೆ ಸಂಬಂಧಪಟ್ಟಂತೆ ತಹಶೀಲ್ದಾರ್‌ರವರಿಂದ ಪಡೆದ (ನಿಗದಿತ ನಮೂನೆಯಲ್ಲಿ) ಜಾತಿ ಪ್ರಮಾಣ ಪತ್ರದ ದೃಢೀಕೃತ ನಕಲು ಸಲ್ಲಿಸುವುದು.
4. ಅರ್ಜಿಯಲ್ಲಿ ಫೋಟೋ ಅಂಟಿಸಲು ನಿಗದಿಪಡಿಸಿರುವ ಸ್ಥಳದಲ್ಲಿ ನಿಮ್ಮ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಿ ಅದರ ಮೇಲೆ ಪೂರ್ಣ ಸಹಿ ಮಾಡುವುದು

- ಈ ಮೇಲೆ ಹೇಳಿದ ಎಲ್ಲಾ ದಾಖಲೆಗಳ ದೃಢೀಕೃತ ಪ್ರತಿ ನೀಡಬೇಕು.

**ಸೂಚನೆಗಳು:**

1. ಅರ್ಜಿಯಲ್ಲಿ ಭರ್ತಿ ಮಾಡಿರುವ ಮಾಹಿತಿ ಮತ್ತು ಅದರೊಂದಿಗೆ ಲಗತ್ತಿಸಿರುವ ಪ್ರಮಾಣ ಪತ್ರಗಳು ಸುಳ್ಳು ಮಾಹಿತಿ ನೀಡಿದ್ದಾಗಿ ನೇಮಕಾತಿಯ ಯಾವುದೇ ಹಂತದಲ್ಲಿ ಕಂಡು ಬಂದಲ್ಲಿ ಅಂತಹ ಅರ್ಜಿಗಳನ್ನು ಪತ್ರ ವ್ಯವಹಾರವಿಲ್ಲದೇ ತಿರಸ್ಕರಿಸಲಾಗುವುದು ಮತ್ತು ಅಂತಹ ಅಭ್ಯರ್ಥಿಗಳ ವಿರುದ್ಧ ಕಾನೂನು ರೀತ್ಯಾ ಕ್ರಮಕೈಗೊಳ್ಳಲು ಉಪಕ್ರಮಿಸಲಾಗುವುದು.
2. ಅಭ್ಯರ್ಥಿಯು ಯಾವುದೇ ಅಪರಾಧ ಮೊಕದ್ದಮೆಯಲ್ಲಿ ಬಂಧನಕ್ಕೆ ಒಳಪಟ್ಟಿರಬಾರದು. ಅಲ್ಲದೆ ಅಪರಾಧ ಮೊಕದ್ದಮೆಯ ತನಿಖೆಗೆ ಒಳಗಾಗಿರಬಾರದು. ಅಪರಾಧ ಪ್ರಕರಣಗಳಲ್ಲಿ ದೋಷಿಯಾಗಿರಬಾರದು. ಒಂದು ವೇಳೆ ಇಂತಹ ಪ್ರಕರಣಗಳಿಗೆ ಒಳಗಾಗಿದ್ದಲ್ಲಿ ಅಂತಹ ಅಭ್ಯರ್ಥಿಯು ನೇಮಕಾತಿಗೆ ಅನರ್ಹರಾಗುತ್ತಾರೆ.
3. ಅಪೂರ್ಣ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
4. ಸುಳ್ಳು ಮಾಹಿತಿ ಅಥವಾ ನಕಲಿ ಪ್ರಮಾಣ ಪತ್ರ/ದಾಖಲಾತಿಗಳನ್ನು ಸಲ್ಲಿಸಿ ನೌಕರಿ ಪಡೆದಿರುವುದು ಯಾವುದೇ ಸಂಧರ್ಭದಲ್ಲಿ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆ ನೀಡದೇ ನೌಕರಿಯಿಂದ ವಜಾ ಮಾಡುವುದರ ಜೊತೆಗೆ ಅವರ ವಿರುದ್ಧ ಕಾನೂನು ರೀತ್ಯಾ ಕ್ರಮ ತೆಗೆದುಕೊಳ್ಳಲಾಗುವುದು.
5. ಈ ಅಧಿಸೂಚನೆಯೊಂದಿಗೆ ಪ್ರಕಟಿಸಿರುವ ಅರ್ಜಿ ನಮೂನೆಯಂತೆ ಅರ್ಜಿಯನ್ನು ಸಿದ್ಧಪಡಿಸಿ ಸಲ್ಲಿಸಬೇಕಾಗಿರುತ್ತದೆ. ಕಚೇರಿ ವತಿಯಿಂದ ಅರ್ಜಿ ನಮೂನೆಗಳನ್ನು ನೀಡಲಾಗುವುದಿಲ್ಲ
6. ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ನೊಂದಾಯಿತ ಅಂಚೆ/ ಕೋರಿಯರ್ ಮುಖಾಂತರ ಅಥವಾ ಸ್ವತ: ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರ ಕಚೇರಿಗೆ ನಿಗದಿತ ದಿನಾಂಕ ಮತ್ತು ಸಮಯದೊಳಗೆ ತಲುಪಿಸಬೇಕು. ತಡವಾಗಿ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲ. ಭರ್ತಿ ಮಾಡಿದ ಅರ್ಜಿಯನ್ನು ಸಲ್ಲಿಸುವ ಲಕೋಟೆಯ ಮೇಲೆ **ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್‌ವೈಸರ್ ಬ್ಯಾಕ್‌ಲಾಗ್ ಹುದ್ದೆಗೆ ಅರ್ಜಿ** ಎಂದು ಸ್ಪಷ್ಟವಾಗಿ ನಮೂದಿಸಬೇಕು, ಅರ್ಜಿ ಸ್ವೀಕರಿಸಿದ್ದಕ್ಕೆ ಸಂಬಂಧಪಟ್ಟವರಿಂದ ದಿನಾಂಕ ಮತ್ತು ಸಹಿ ಪಡೆದುಕೊಳ್ಳಬಹುದಾಗಿದೆ.
7. ಸಲ್ಲಿಸಲಾಗುವ ಯಾವುದೇ ದಾಖಲೆಗಳನ್ನು ಹಿಂದಿರುಗಿಸಲಾಗುವುದಿಲ್ಲ. ಈ ಕುರಿತು ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶ ಇರುವುದಿಲ್ಲ.

**ಆಯುಕ್ತರು,**
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು

## ಕನ್ನಡ ಮತ್ತು ಸಂಸ್ಕೃತಿ ಇಲಾಖೆ

### ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್‌ವೈಸರ್ ಹುದ್ದೆಗೆ ಅರ್ಜಿ

ಅರ್ಜಿ ಸಂಖ್ಯೆ:

ನಿಮ್ಮ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಿ ಅದರ ಮೇಲೆ ಸಹಿ ಮಾಡುವುದು

ಗೆ:
ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು–560 002

1) ಅಭ್ಯರ್ಥಿಯ ಹೆಸರು :

2) ತಂದೆಯ ಹೆಸರು :

3) ಅಭ್ಯರ್ಥಿಯ ಅಂಚೆ ವಿಳಾಸ :

4) ವಿದ್ಯಾರ್ಹತೆ :

| ಕ್ರ. ಸಂ. | ಡಿಪ್ಲೊಮಾ (ಟೆಲಿಕಮ್ಯೂನಿಕೇಷನ್) ಸೌಂಡ್ ಹಾಗೂ ಟಿ.ವಿ | ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು | ಶೇಕಡಾವಾರು |
|---|---|---|---|---|
| | | | | |

5) ಹುಟ್ಟಿದ ದಿನಾಂಕ :

6) ಲಗತ್ತುಗಳು

1. ಎಸ್.ಎಸ್.ಎಲ್.ಸಿ ಅಂಕಪಟ್ಟಿಯ ದೃಢೀಕೃತ ಪ್ರತಿ
2. ಜಾತಿ ಪ್ರಮಾಣ ಪತ್ರದ ದೃಢೀಕೃತ ಪ್ರತಿ
3. ಅರ್ಹತಾ (Qualifying) ಪರೀಕ್ಷೆಯ ಅಂದರೆ ಡಿಪ್ಲೋಮೋ ಅಂಕಪಟ್ಟಿಯ ದೃಢೀಕೃತ ನಕಲುಗಳು

**ಸೂಚನೆ** : ಅಧಿಸೂಚನೆಯಲ್ಲಿ ಸೂಚಿಸಿರುವ ಎಲ್ಲಾ ಸೂಚನೆಗಳಂತೆ ಅರ್ಜಿ ಸಲ್ಲಿಸದಿದ್ದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದು

**ಘೋಷಣೆ**

ಮೇಲೆ ಹೇಳಿದ ವಿವರಗಳು ನನಗೆ ತಿಳಿದ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ನಿಜವೆಂದು ಈ ಮೂಲಕ ಘೋಷಿಸುತ್ತೇನೆ. ಯಾವುದೇ ಮಾಹಿತಿಯ, ನೇಮಕಾತಿ ಮುಂಚೆ ಅಥವಾ ತರುವಾಯ ಸುಳ್ಳು ಅಥವಾ ತಪ್ಪೆಂದು ಕಂಡು ಬಂದ ಸಂಧರ್ಭದಲ್ಲಿ ಅಥವಾ ಅನರ್ಹತೆ ಪತ್ತೆ ಆದ ಸಂದರ್ಭದಲ್ಲಿ ನೇಮಕಾತಿ ಸಮಿತಿಯು ನನ್ನ ವಿರುದ್ಧ ಕ್ರಮ ಕೈಗೊಳ್ಳಬಹುದಾಗಿದೆ ಎಂದು ನನಗೆ ತಿಳಿದಿರುತ್ತದೆ.

ನಾನು ಅಧಿಸೂಚನೆಯ ನಿಯಮಗಳನ್ನು ಜಾಗರೂಕತೆಯಿಂದ ಓದಿರುತ್ತೇನೆ. ಮತ್ತು ಅವುಗಳಿಗೆ ಬದ್ಧನಾಗಿರುತ್ತೇನೆ. ನಾನು ಅರ್ಜಿ ಸಲ್ಲಿಸಿದ ಹುದ್ದೆಯ ನೇಮಕಾತಿಗೆ ನಿಗದಿಪಡಿಸಿದ ವಯೋಮಿತಿ ವಿದ್ಯಾರ್ಹತೆ ಮುಂತಾದ ಅರ್ಹತೆಯ ಎಲ್ಲ ಷರತ್ತುಗಳನ್ನು ಪೂರೈಸುವುದಾಗಿಯೂ ಮತ್ತು ಇದೇ ಬಗೆಯ ಯಾವುದೇ ಪರೀಕ್ಷೆಗೆ ಹಾಜರಾಗದಂತೆ ನಾನು ಪರೀಕ್ಷೆಯಿಂದ ಉಚ್ಚಾಟಿಸಲ್ಪಟ್ಟಿಲ್ಲವೆಂದು ಸಹ ಘೋಷಿಸುತ್ತೇನೆ.

ಸ್ಥಳ :

**ಅಭ್ಯರ್ಥಿಯ ಪೂರ್ಣ ಸಹಿ**

ದಿನಾಂಕ :

**ಪರಿಶೀಲಿಸಿದ ಅಧಿಕಾರಿಯ ಸಹಿ ಮತ್ತು ಹೆಸರು**

ಪಿ.ಆರ್. 36